ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ : 24ನೇ ಜುಲೈ, 2019

16. ಕಟ್ಟಡ ಕಾರ್ಮಿಕರ ಮಂಡಳಿಯಲ್ಲಿ ಅವ್ಯವಹಾರ ನಡೆದಿರುವ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

571 (617) ಮಾನ್ಯ ಕಾರ್ಮಿಕ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು 18.01.2007 ರಂದೇ ಅಸ್ತಿತ್ವಕ್ಕೆ ಬಂದಿದ್ದರೂ ದಿನಾಂಕ: 05.02.2018 ರಂದು ಆದಾಯ ತೆರಿಗೆ ಇಲಾಖೆಯಿಂದ 413.08 ಕೋಟಿ ತೆರಿಗೆ ಬಾಕಿ ಇದೆ ಎಂಬ ನೋಟೀಸ್ ಬಂದ 6 ತಿಂಗಳ ಬಳಿಕ ದಿನಾಂಕ: 28-8-2018ರಂದು ಆದಾಯ ತೆರಿಗೆ ಕಾಯ್ದೆ ಕಲಂ 10(46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸಿದ್ದು, ಈ ರೀತಿಯ ತೀವ್ರ ಕರ್ತವ್ಯ ನಿರ್ಲಕ್ಷ ವಹಿಸಿದ ಅಧಿಕಾರಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಆ) ಮಂಡಳಿಯು ಅಸ್ತಿತ್ವಕ್ಕೆ ಬಂದ 11 ವರ್ಷಗಳ ಕಾಲ ಆದಾಯ ತೆರಿಗೆ ಕಾಯ್ದೆ ಕಲಂ 10 (46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸದಿರಲು ಕಾರಣವೇನು ; ಈ ಪ್ರಕರಣದಲ್ಲಿ ಸಂಪೂರ್ಣವಾಗಿ ಮಂಡಳಿಯ ಅಧಿಕಾರಿ ಮತ್ತು ಸಿಬ್ಬಂದಿಗಳ ಕರ್ತವ್ಯದಲ್ಲಿ ತೀವ್ರ ತರದ ನಿರ್ಲಕ್ಷ ಧೋರಣೆ ಸ್ಪಷ್ಟವಾಗಿ ಗೋಚರಿಸುತ್ತಿದ್ದು, ಸಂಬಂಧಿತ ಅಧಿಕಾರಿ ಮತ್ತು ಸಿಬ್ಬಂದಿಗಳನ್ನು ಅಮಾನತ್ತುಗೊಳಿಸಿ ವಿಚಾರಣೆ ನಡೆಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ;

(ಇ) ರೂ. 413.08 ಕೋಟಿ ರೂಗಳಲ್ಲಿ ಕೇವಲ 80 ಶೇಕಡಾ ಮಾತ್ರವೇ ಆದಾಯ ತೆರಿಗೆ ಇಲಾಖೆಯಿಂದ ವಾಪಾಸ್ ಪಡೆಯುವ ನಿರೀಕ್ಷೆ ಮಾತ್ರವೇ ಇದ್ದು 20 ಶೇಕಡಾ ನಷ್ಟಕ್ಕೆ ಕಾರಣರಾದ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ; ಬಾಕಿ ಉಳಿದ 20 ಶೇಕಡಾ ಮೊತ್ತವನ್ನು ಸಂಬಂಧಿತ ಅಧಿಕಾರಿಗಳಿಂದ ವಸೂಲಿ ಮಾಡಲು ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ ;

(ಈ) ಸಾಮಾನ್ಯ ಬಡ ಕಟ್ಟಡ ಕೂಲಿ ಕಾರ್ಮಿಕರಿಗೆ ಅನ್ಯಾಯ ಮಾಡಿರುವ ಅಧಿಕಾರಿಗಳಿಂದಲೇ ನಷ್ಟವಾಗಿರುವ ಮೊತ್ತ ಮತ್ತು ವಕೀಲರ ಮೊತ್ತವನ್ನು ವಸೂಲಿ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು ಯಾವಾಗ ?